CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೬, ೨೦೦೩ (ಆಶ್ವಯುಜ ೨೪, ಶಕ ವರ್ಷ ೧೯೨೫) | ಸಂಚಿಕೆ ೪೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ, ತುಮಕೂರು ತಾಲ್ಲೂಕ್, ಈ ಸಂಸ್ಥೆಗೆ ನೇಮಕವಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 70 ಮುನೊಸೊ 96, ದಿನಾಂಕ: 30-8-97.
2. ಸರ್ಕಾರಿ ಆದೇಶ ಸಂಖ್ಯೆ:ಕಂಇ 70 ಮುನೊಸೊ 96, ದಿನಾಂಕ:17-4-98, 13-11-98, 4-5-99 ಮತ್ತು 13-10-2000, 25-4-2001, 25-4-2001, 12-10-2001, 4-5-2002 ಮತ್ತು 26-2-2003.
3. ಆಡಳಿತಾಧಿಕಾರಿ, ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ ತುಮಕೂರು ತಾಲ್ಲೂಕು ರವರ ಪತ್ರ ಸಂಖ್ಯೆ: 95-2002.

**ಪ್ರಸ್ತಾವನೆ:**

ಓದಲಾದ ಸರ್ಕಾರಿ ಆದೇಶ (1)ರಲ್ಲಿ ತುಮಕೂರು ಉಪ ವಿಭಾಗದ ವಿಭಾಗಾಧಿಕಾರಿಯನ್ನು ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ ಹೊನ್ನುಡಿಕೆ ಇದರ ವ್ಯವಹಾರಗಳನ್ನು ಸರಿಪಡಿಸಲು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು. ಹಾಗೂ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಕಾಲ ಕಾಲಕ್ಕೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ ಇವರು ಪ್ರಸ್ತಾವನೆಯನ್ನು ಕಳುಹಿಸಿ, ಸದರಿ ಸಂಸ್ಥೆ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಸಮಿತಿಯ ಶಾಲೆಯನ್ನು ಸರ್ಕಾರವೇ ವಹಿಸಿಕೊಳ್ಳಬೇಕು. ಅಲ್ಲಿಯವರೆಗೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಲು ಕೋರಿದ್ದಾರೆ. ಆಡಳಿತಾಧಿಕಾರಿಯ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 70 ಮುನೊಸೊ 96, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2003**

ಸರ್ಕಾರವು ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ಪ್ರಕಾರ ಶ್ರೀ ಸ್ವರ್ಣಾಂಬ ವಿದ್ಯಾ ಸಮಿತಿ, ಹೊನ್ನುಡಿಕೆ, ತುಮಕೂರು ತಾಲ್ಲೂಕ್, ಈ ಸಂಸ್ಥೆಗೆ ನೇಮಕವಾದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:1-3-2003ರಿಂದ 6 ತಿಂಗಳ ಅವಧಿಗೆ ಅಥವಾ ಚುನಾವಣೆ ನಡೆಸಿ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ವಿಸ್ತರಿಸಿದ ಅವಧಿಯೊಳಗೆ ಸದರಿ ಸಂಸ್ಥೆಗೆ ಚುನಾವಣೆ ನಡೆಸಲು ಕ್ರಮ ಕೈಗೊಳ್ಳಬೇಕೆಂದು ಆಡಳಿತಾಧಿಕಾರಿಯವರಿಗೆ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1213

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

### ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ಅರಣ್ಯ ಇಲಾಖೆಯ ಕೆಲವು ಅನುಪಯುಕ್ತ ಟಿಂಬರ್ ಡಿಪೋಗಳನ್ನು ಮುಚ್ಚುವ ಬಗ್ಗೆ.

**ಓದಲಾಗಿದೆ:**
1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರದ ಸಂಖ್ಯೆ: ಎ6/ಸಿಆರ್-97/ಶ್ರೀಗಂಧ/2002-03, ದಿನಾಂಕ: 19-6-2003.
2. ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ) ಬೆಂಗಳೂರು ಇವರ ಪತ್ರ ಸಂಖ್ಯೆ: ಎ6/ಎ/ಶ್ರೀಗಂಧ/ವಿವ-1/2002-03, ದಿನಾಂಕ: 16-5-2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರದಲ್ಲಿ ಶ್ರೀಗಂಧದ ದಾಸ್ತಾನು ಪ್ರಮಾಣ ಇಳಿಮುಖ ಆಗಿರುವ ಡಿಪೋಗಳನ್ನು ಮುಂದುವರೆಸುವ ಮತ್ತು ಮುಚ್ಚುವ ಬಗ್ಗೆ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ), ಬೆಂಗಳೂರು ಇವರಿಂದ ವರದಿಯನ್ನು ಪಡೆದು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ) ಬೆಂಗಳೂರು ರವರ ಪತ್ರದಲ್ಲಿ ಮಡಿಕೇರಿ ವಿಭಾಗದ ಕುಶಾಲನಗರ ಶ್ರೀಗಂಧದ ಡಿಪೋದಲ್ಲಿ ದಾಸ್ತಾನಿನ ಪ್ರಮಾಣ ಕಡಿಮೆ ಇದ್ದುದರಿಂದ ಸರ್ಕಾರ ಆದೇಶದ ಸಂಖ್ಯೆ: ಅಪಜೀ 115 ಎಫ್‌ಡಿಪಿ 2001, ದಿನಾಂಕ: 19-11-2002ರಲ್ಲಿ ರದ್ದು ಮಾಡಿರುವ ಡಿಪೋಗಳಲ್ಲಿ ಕುಶಾಲನಗರ ಶ್ರೀಗಂಧದ ಕೋಠಿಯೂ ಸಹ ಸೇರಿರುತ್ತದೆ. ಭದ್ರಾವತಿ ವಿಭಾಗದ ತರೀಕೆರೆ ಶ್ರೀಗಂಧದ ಡಿಪೋ, ಶಿವಮೊಗ್ಗ ಶ್ರೀಗಂಧದ ಡಿಪೋಗೆ ಹತ್ತಿರವಾಗಿರುವುದರಿಂದ ಹಾಗೂ ಸದರಿ ಡಿಪೋಗಳಲ್ಲಿ ಅರಣ್ಯ ಮೊಕದ್ದಮೆ ಪ್ರಕರಣಗಳಿಗೆ ಸೇರಿದ ಮಾಲು ಇಲ್ಲದಿರುವುದರಿಂದ ತರೀಕೆರೆ ಶ್ರೀಗಂಧದ ಡಿಪೋವನ್ನು ತಕ್ಷಣ ಮುಚ್ಚಬಹುದೆಂದು ಹಾಗೂ ಹಾಸನದ ಶ್ರೀಗಂಧದ ಕೋಠಿಯಲ್ಲಿ ದಾಸ್ತಾನಿನ ಪ್ರಮಾಣ ಇಳಿಮುಖವಾಗುತ್ತಿರುವುದರಿಂದ ಇನ್ನು ಮುಂದೆ ಹಾಸನ ಶ್ರೀಗಂಧದ ಡಿಪೋವನ್ನು ಸಹ ಮುಚ್ಚಲು ಆದೇಶ ಹೊರಡಿಸುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 9 ಎಫ್‌ಎಸ್‌ಡಬ್ಲ್ಯೂ 2002, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಭದ್ರಾವತಿ ವಿಭಾಗದ ತರೀಕೆರೆ ಶ್ರೀಗಂಧದ ಡಿಪೋ ಮತ್ತು ಹಾಸನದ ಶ್ರೀಗಂಧದ ಡಿಪೋವನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಮುಚ್ಚಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್. 1214

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಕೆ.ಸಿ.ಸಿ. ಬ್ಯಾಂಕ್ ಧಾರವಾಡ ಇದರ ಪುನಶ್ಚೇತನಗೊಳಿಸಲು ಬೆಳೆಸಾಲ: ಮಧ್ಯಾಮಾವಧಿ ಸಾಲದ ಮೇಲಿನ ಬಡ್ಡಿ ಮನ್ನಾ ಕುರಿತು.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ದಿನಾಂಕ:28.8.2003.

**ಪ್ರಸ್ತಾವನೆ:**

ಧಾರವಾಡ ಕೆ.ಸಿ.ಸಿ. ಬ್ಯಾಂಕು ರೈತರಿಗೆ ಬೆಳೆ ಸಾಲಗಳನ್ನು ನೀಡಿದ್ದು ಪ್ರಕೃತಿ ವಿಕೋಪದಿಂದ ಬೆಳೆ ವಿಫಲವಾದ ಪ್ರಯುಕ್ತ ಸಾಲ ವಸೂಲಿಯಾಗದೆ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯು ಅಪಾಯಕಾರಿ ಹಂತವನ್ನು ಮುಟ್ಟಿದೆ. ಈ ಬ್ಯಾಂಕು ಬ್ಯಾಂಕಿಂಗ್ ರೆಗ್ಯುಲೇಶನ್ ಆ್ಯಕ್ಟ್ 1949ರ ಕಲಂ 11(1)ರ ವ್ಯಾಪ್ತಿಗೆ ಒಳಪಟ್ಟಿದ್ದು ಆರ್.ಬಿ.ಐ. ದಿನಾಂಕ 31.03.2004ರವರೆಗೆ ಸದರಿ ಕಲಂನಿಂದ ವಿನಾಯಿತಿ ನೀಡಿರುತ್ತದೆ. ದಿನಾಂಕ 31.03.2003ಕ್ಕೆ ಎಲ್ಲಾ ಅಲ್ಪಾವಧಿ ಮತ್ತು ಮಧ್ಯಮಾವಧಿ ಸುಸ್ತಿ ಸಾಲಗಳ ಪ್ರಮಾಣವು 169.57 ಕೋಟಿ ರೂಗಳಿರುತ್ತದೆ ಹಾಗೂ ಸದರಿ ಸಾಲಗಳ ಮೇಲಿನ ಸಂಚಿತವಾಗಿರುವ ಬಡ್ಡಿ ಪ್ರಮಾಣವು ರೂ.102.89 ಕೋಟಿಗಳಾಗಿರುತ್ತದೆ. ಈ ಸುಸ್ತಿ ಸಾಲಗಳ ಮೇಲಿನ ಬಡ್ಡಿಯನ್ನು ಪೂರ್ಣವಾಗಿ ಮನ್ನಾ ಮಾಡಿದಲ್ಲಿ ಶೇ.50 ರಷ್ಟು ಸುಸ್ತಿ ಸಾಲಗಳು ವಸೂಲಿಯಾಗಬಹುದೆಂದು ಅಂದಾಜು ಮಾಡಲಾಗಿದೆ. ಇದರಿಂದ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯು ಗಣನೀಯವಾಗಿ ಸುಧಾರಣೆಯಾಗಿ ರೈತರಿಗೆ ಪುನಃ ಸಾಲವನ್ನು ನೀಡುವ ಶಕ್ತಿಯನ್ನು ಪಡೆಯುತ್ತದೆ ಎಂದು ಭಾವಿಸಲಾಗಿದೆ. ಆದ್ದರಿಂದ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ರೈತರಿಗೆ ನೀಡಿರುವ ಎಲ್ಲಾ ಸುಸ್ತಿ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳ ಮೇಲಿನ ಪೂರ್ಣ ಬಡ್ಡಿಯನ್ನು ಮನ್ನಾ ಮಾಡಲು ಸರ್ಕಾರವು ತೀರ್ಮಾನಿಸಿದೆ.

ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಎಂಡಬ್ಲ್ಯೂ: 293 ಸಿಸಿಬಿ 2003, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕೆ.ಸಿ.ಸಿ. ಬ್ಯಾಂಕ್ ನಿ, ಧಾರವಾಡ ಇದರ ದಿನಾಂಕ 30.06.2003ಕ್ಕೆ ಬಾಕಿಯಿರುವ ಎಲ್ಲಾ ಸುಸ್ತಿ ಬೆಳೆಸಾಲ ಮತ್ತು ಮಧ್ಯಮಾವಧಿ ಸಾಲಗಳ ಮೇಲಿನ ಪೂರ್ತಿ ಬಡ್ಡಿಯನ್ನು ಮನ್ನಾ ಮಾಡಲು ಮಂಜೂರಾತಿ ನೀಡಿದೆ. ಈ ಸೌಲಭ್ಯವು ದಿನಾಂಕ 31.03.2004ರೊಳಗೆ ಪೂರ್ಣವಾಗಿ ಅಸಲನ್ನು ಮರುಪಾವತಿ ಮಾಡುವ ರೈತರಿಗೆ ಮಾತ್ರ ಲಭ್ಯವಿರುತ್ತದೆ.

ಈ ಸಂಬಂಧದ ನಷ್ಟವನ್ನು ಸರ್ಕಾರ, ಅಪೆಕ್ಸ್ ಬ್ಯಾಂಕ್ ಮತ್ತು ಕೆ.ಸಿ.ಸಿ.ಬ್ಯಾಂಕು ಅನುಕ್ರಮವಾಗಿ ಶೇ. 50 : 25 : 25ರ ಅನುಪಾತದಲ್ಲಿ ಭರಿಸತಕ್ಕದ್ದು, ಶೇ.50ರ ಸರ್ಕಾರದ ವಂತಿಕೆಯನ್ನು ಭರಿಸಲು ರೂ.25.00 ಕೋಟಿ (ರೂ. ಇಪ್ಪತ್ತೈದು ಕೋಟಿಗಳು ಮಾತ್ರ) ಗಳ ಪಾವತಿಗೆ ಮಂಜೂರಾತಿ ನೀಡಿದೆ.

ಕೆ.ಸಿ.ಸಿ. ಬ್ಯಾಂಕು ಸಹಕಾರ ಸಂಘಗಳ ನಿಬಂಧಕರ ಮೂಲಕ ಸುಸ್ತಿಸಾಲದ ಮೊಬಲಗು ರೂ.169.57ಗಳ ವಸೂಲಾತಿ ಬಗ್ಗೆ ಪ್ರಗತಿ ತಃಖ್ತೆಗಳನ್ನು ಸಾಲವಾರು ಮತ್ತು ರೈತವಾರು ಪ್ರತಿ ತಿಂಗಳು ಸಹಕಾರ ಇಲಾಖೆ ಮತ್ತು ಆರ್ಥಿಕ ಇಲಾಖೆಗೆ ಸಲ್ಲಿಸತಕ್ಕದ್ದು ಮತ್ತು ಅಸಲು ವಸೂಲಿಯಾದ ನಂತರ ಬಡ್ಡಿ ಮನ್ನಾ ಮೊಬಲಗನ್ನು ಸರ್ಕಾರದಿಂದ ಪಡೆಯಲು ಬಿಲ್ಲನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/1206/ವೆಚ್ಚ-2/03 ದಿನಾಂಕ:15-09-03ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1215

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಪುನಶ್ಚೇತನಕ್ಕಾಗಿ ಷೇರು ಬಂಡವಾಳ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ: ಸಿ.276, ದಿನಾಂಕ:28.8.2003.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆಯಲ್ಲಿ ಮೂರು ವರ್ಷಗಳಿಂದ ಸತತ ಬರ ಪರಿಸ್ಥಿತಿ ಇರುವ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ರೈತರಿಗೆ ನೀಡಿರುವ ಸಾಲ ವಸೂಲಿಯಾಗದೆ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯು ತುಂಬಾ ಸಂಕಷ್ಟದಲ್ಲಿದ್ದು, ಈ ಬ್ಯಾಂಕು ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ 1949ರ ಕಲಂ 11(1)ರ ವ್ಯಾಪ್ತಿಗೆ ಒಳಪಟ್ಟಿದ್ದು ಆರ್.ಬಿ.ಐ. ದಿನಾಂಕ: 31.03.2004ರವರೆಗೆ ಸದರಿ ಕಲಂ ನಿಂದ ವಿನಾಯಿತಿ ನೀಡಿರುತ್ತದೆ. ಸರ್ಕಾರವು ಈ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಹಾಗೂ ಇದರ ಪುನಶ್ಚೇತನಕ್ಕಾಗಿ ಷೇರು ಬಂಡವಾಳ ರೂಪದಲ್ಲಿ ರೂ. 3-00 ಕೋಟಿಗಳನ್ನು ಮಂಜೂರು ಮಾಡಲು ತೀರ್ಮಾನಿಸಿದೆ. ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ: 294 ಸಿಸಿಬಿ 2003, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಗುಲ್ಬರ್ಗಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ ಇದಕ್ಕೆ ಸರ್ಕಾರದಿಂದ ಷೇರು ಬಂಡವಾಳ ರೂಪದಲ್ಲಿ ರೂ.193.00 ಲಕ್ಷಗಳನ್ನು ಮೊದಲ ಕಂತಾಗಿ (ರೂ. ಒಂದುನೂರ ತೊಂಬತ್ತ ಮೂರು ಲಕ್ಷಗಳು ಮಾತ್ರ) ಮಂಜೂರು ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ನಿಬಂಧಕರು ಹಣ ಸ್ವೀಕೃತಿ ರಸೀತಿಯ ಮೇಲೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಇವರ ಮೇಲು ರುಜು ಪಡೆದು ಪಡೆಯತಕ್ಕದ್ದು.

ಈ ಉದ್ದೇಶಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 4425 ಸಹಕಾರದ ಮೇಲಣ ಬಂಡವಾಳ ವೆಚ್ಚ 108 ಇತರ ಸಹಕಾರ ಸಂಸ್ಥೆಗಳಲ್ಲಿ ಬಂಡವಾಳ ಹೂಡಿಕೆ 132 ಬಂಡವಾಳ ವೆಚ್ಚಗಳು (ಲೆಕ್ಕಶೀರ್ಷಿಕೆ 4425-00-108-0-49) (ಯೋಜನೆ) ಇದರಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:1215/ವೆಚ್ಚ-2:03 ದಿನಾಂಕ:11-9-2003 ರಂತೆ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1216

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಪಿಕಾರ್ಡ್ ಬ್ಯಾಂಕುಗಳು ನೀಡಿರುವ ದೀರ್ಘಾವಧಿ ಸಾಲಗಳ ಮೇಲಿನ ಬಡ್ಡಿ ರಿಯಾಯಿತಿ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ: ಸಿ-276, ದಿನಾಂಕ:28.8.2003.

**ಪೀಠಿಕೆ:**

ರಾಜ್ಯದಲ್ಲಿ ಸತತ ಮೂರು ವರ್ಷಗಳಿಂದ ಇರುವ ಬರಗಾಲವು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಪಿಕಾರ್ಡ್) ಬ್ಯಾಂಕುಗಳಿಂದ ದೀರ್ಘಾವಧಿ ಸಾಲ ಪಡೆದಿರುವ ರೈತರ ಮರುಪಾವತಿ ಸಾಮರ್ಥ್ಯವನ್ನು ಕುಂಠಿತಗೊಳಿಸಿದೆ. ಕೃಷಿ ಉತ್ಪನ್ನಗಳ ಬೆಲೆ ಕುಸಿತ ಮತ್ತು ಕೆಲವು ಬೆಳೆಗಳಿಗೆ ತಗುಲಿರುವ ರೋಗಗಳು ರೈತರ ದುಃಖವನ್ನು ಇಮ್ಮಡಿಗೊಳಿಸಿವೆ. ದಿನಾಂಕ: 31.03.2003ಕ್ಕೆ ಕಸ್ಕಾರ್ಡ್ ಬ್ಯಾಂಕು ದೃಢೀಕರಿಸಿದ ತಃಖ್ತೆ ಪ್ರಕಾರ ಸುಸ್ತಿ ಅಸಲು ತಗಾದೆ 233.75 ಕೋಟಿರೂ ಮತ್ತು ಚಾಲ್ತಿ ಅಸಲು ತಗಾದೆ 80.39 ಕೋಟಿರೂ ಇದ್ದು ಇದಕ್ಕನುಗುಣವಾಗಿ ಸುಸ್ತಿಸಾಲಗಳ ಮೇಲಿನ ಬಡ್ಡಿಯು 178.32 ಕೋಟಿರೂ ಮತ್ತು ಚಾಲ್ತಿ ಸಾಲಗಳ ಮೇಲಿನ ಬಡ್ಡಿಯು 87.93 ಕೋಟಿರೂ ಇರುತ್ತದೆ. ಪ್ರಸಕ್ತ ರೈತರ ಸಂಕಷ್ಟವನ್ನು ಪರಿಗಣಿಸಿ ರೈತರು ದಿನಾಂಕ 31.03.2003ಕ್ಕೆ ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ಶೇ.9 ರ ಬಡ್ಡಿ ಸಹಿತ ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಶೇ.9ಕ್ಕಿಂತ ಹೆಚ್ಚಿನ ಸರಾಸರಿ ಶೇ.5.5 ರಷ್ಟು ಬಡ್ಡಿಯನ್ನು ಮನ್ನಾ/ರಿಯಾಯಿತಿ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 115 ಸಿಎಲ್‌ಎಸ್ 2002, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ದಿನಾಂಕ 31.03.2003ಕ್ಕೆ ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ರೈತರು ಶೇ.9ರ ಬಡ್ಡಿ ಸಹಿತ ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಶೇ.9ಕ್ಕಿಂತ ಹೆಚ್ಚಿನ ಬಡ್ಡಿಯನ್ನು ಮನ್ನಾ ಮಾಡಲು ಮತ್ತು ತತ್ಸಂಬಂಧವಾದ ಮೊಬಲಗು 33.00 ಕೋಟಿರೂಗಳನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಭರ್ತಿ ಮಾಡಿಕೊಡಲು ಮಂಜೂರಾತಿ ನೀಡಲಾಗಿದೆ. ಈ ಸೌಲಭ್ಯವು ದಿನಾಂಕ 31.03.2004ರೊಳಗೆ ಮೇಲಿನಂತೆ ಮರುಪಾವತಿ ಮಾಡುವ ಎಲ್ಲಾ ರೈತರಿಗೂ ಅನ್ವಯವಾಗುತ್ತದೆ.

ರೈತರು ಈಗಾಗಲೇ ಶೇ.9ಕ್ಕಿಂತ ಹೆಚ್ಚಿನ ಚಾಲ್ತಿ ಸಾಲಿನ ಬಡ್ಡಿಯನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಪಾವತಿಸಿದ್ದಲ್ಲಿ ಅದನ್ನು ಅವರಿಂದ ಬರಬೇಕಾದ ಮುಂದಿನ ಬಾಕಿಗಳಿಗೆ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

ಕಸ್ಕಾರ್ಡ್ ಬ್ಯಾಂಕು ವಸೂಲಾದ ಅಸಲು ಮತ್ತು ಅದರ ಮೇಲಿನ ಬಡ್ಡಿ ರಿಯಾಯಿತಿಗೆ ಸಂಬಂಧಪಟ್ಟಂತೆ ಮಾಸಿಕ ಪ್ರಗತಿ ವರದಿಗಳನ್ನು ಸಹಕಾರ ಮತ್ತು ಆರ್ಥಿಕ ಇಲಾಖೆಗಳಿಗೆ ಸಲ್ಲಿಸತಕ್ಕದ್ದು. ರೈತರಿಂದ ಚಾಲ್ತಿ ಸಾಲಿನ ಅಸಲು ಮತ್ತು ಶೇ.9ರ ಬಡ್ಡಿ ವಸೂಲಿಯಾದ ನಂತರ, ಬಡ್ಡಿ ರಿಯಾಯಿತಿ ಕ್ಲೇಮು ಬಿಲ್ಲನ್ನು ಕಸ್ಕಾರ್ಡ್ ಬ್ಯಾಂಕು ಸಹಕಾರಿ ಲೆಕ್ಕಪರಿಶೋಧನಾ ಇಲಾಖೆಯಿಂದ ದೃಢೀಕರಿಸಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ಸದರಿ ಬಿಲ್ಲನ್ನು ಸಹಕಾರಿ ಲೆಕ್ಕ ಪರಿಶೋಧನಾ ಇಲಾಖೆ ಮತ್ತು ರಾಜ್ಯ ಲೆಕ್ಕಪತ್ರ ಇಲಾಖೆಗಳಿಂದ ಜಂಟಿಯಾಗಿ ಪರಿಶೀಲಿಸಿದ ನಂತರ ಹಣ ಬಿಡುಗಡೆ ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/1208/ವೆಚ್ಚ-2/03 ದಿನಾಂಕ:11-9-2003 ರಂತೆ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1217

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಪಿಕಾರ್ಡ್ ಬ್ಯಾಂಕುಗಳು ತೋಟಗಾರಿಕೆ ಬೆಳೆಗಳಿಗೆ ನೀಡಿರುವ ಧೀರ್ಘಾವಧಿ ಸಾಲಗಳ ಮೇಲಿನ ಬಡ್ಡಿ ರಿಯಾಯಿತಿ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ: ಸಿ-276, ದಿನಾಂಕ:28.8.2003.

**ಪೀಠಿಕೆ:**

ರಾಜ್ಯದಲ್ಲಿ ಸತತ ಮೂರು ವರ್ಷಗಳಿಂದ ಇರುವ ಬರಗಾಲವು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಪಿಕಾರ್ಡ್) ಬ್ಯಾಂಕುಗಳಿಂದ ಧೀರ್ಘಾವಧಿ ಸಾಲ ಪಡೆದಿರುವ ರೈತರ ಮರುಪಾವತಿ ಸಾಮರ್ಥ್ಯವನ್ನು ಕುಂಠಿತಗೊಳಿಸಿದೆ. ಕೃಷಿ ಉತ್ಪನ್ನಗಳ ಬೆಲೆ ಕುಸಿತ ಮತ್ತು ಕೆಲವು ಬೆಳೆಗಳಿಗೆ ತಗುಲಿರುವ ರೋಗಗಳು ರೈತರ ದುಃಖವನ್ನು ಇಮ್ಮಡಿಗೊಳಿಸಿವೆ. ದಿನಾಂಕ: 31.03.2003ಕ್ಕೆ ಕಸ್ಕಾರ್ಡ್ ಬ್ಯಾಂಕು ದೃಢೀಕರಿಸಿದ ತಃಖ್ತೆಯ ಪ್ರಕಾರ ಸುಸ್ತಿ ಅಸಲು ತಗಾದೆ 233.75 ಕೋಟಿರೂ ಮತ್ತು ಚಾಲ್ತಿ ಅಸಲು ತಗಾದೆ 80.39 ಕೋಟಿರೂ ಇದ್ದು ಇದಕ್ಕನುಗುಣವಾಗಿ ಸುಸ್ತಿಸಾಲಗಳ ಮೇಲಿನ ಬಡ್ಡಿಯು 178.32 ಕೋಟಿರೂ ಮತ್ತು ಚಾಲ್ತಿ ಸಾಲಗಳ ಮೇಲಿನ ಬಡ್ಡಿಯು 87.93 ಕೋಟಿರೂ ಇರುತ್ತದೆ. ಅಲ್ಲದೆ ತೋಟಗಾರಿಕೆ ಬೆಳೆಗಳಿಗೆ ಸಂಬಂಧಪಟ್ಟಂತೆ ಸುಸ್ತಿ ಅಸಲು ತಗಾದೆಯು 18.21 ಕೋಟಿರೂ ಮತ್ತು ಚಾಲ್ತಿ ಅಸಲು ತಗಾದೆಯು 9.26 ಕೋಟಿರೂ ಇದ್ದು ಇದಕ್ಕನುಗುಣವಾಗಿ ಸುಸ್ತಿಸಾಲಗಳ ಮೇಲಿನ ಬಡ್ಡಿಯು 26.28 ಕೋಟಿರೂ ಮತ್ತು ಚಾಲ್ತಿಸಾಲಗಳ ಮೇಲಿನ ಬಡ್ಡಿಯು 20.00 ಕೋಟಿರೂ ಇರುತ್ತದೆ. ಪ್ರಸಕ್ತ ರೈತರ ಸಂಕಷ್ಟವನ್ನು ಮತ್ತು ತೋಟಗಾರಿಕೆ ಬೆಳೆಗಳಿಗೆ ತೀವ್ರ ನಷ್ಟವುಂಟಾಗಿರುವುದನ್ನು ಪರಿಗಣಿಸಿ ರೈತರು ದಿನಾಂಕ 31.03.2003ಕ್ಕೆ ತೋಟಗಾರಿಕೆ ಬೆಳೆಗಳಿಗೆ (ದ್ರಾಕ್ಷಿ, ದಾಳಿಂಬೆ ಮತ್ತು ನಿಂಬೆ) ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಹೊರಬಾಕಿ (outstanding) ಸಾಲಗಳ ಮೇಲಿನ ಚಾಲ್ತಿ ಬಡ್ಡಿಯ ಮೊಬಲಗು 20.00 ಕೋಟಿರೂಗಳನ್ನು ಮನ್ನಾ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 115 ಸಿಎಲ್ಎಸ್ 2002(ಭಾಗ), ಬೆಂಗಳೂರು,**
**ದಿನಾಂಕ: 15ನೇ ಸೆಪ್ಟೆಂಬರ್ 2003**

ದಿನಾಂಕ 31.03.2003ಕ್ಕೆ ತೋಟಗಾರಿಕೆ ಬೆಳೆಗಳಿಗೆ (ದ್ರಾಕ್ಷಿ, ದಾಳಿಂಬೆ ಮತ್ತು ನಿಂಬೆ) ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ರೈತರು ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಹೊರಬಾಕಿ (outstanding) ಸಾಲಗಳ ಮೇಲಿನ ಚಾಲ್ತಿ ಬಡ್ಡಿಯನ್ನು ಮನ್ನಾ ಮಾಡಲು ಮತ್ತು ತತ್ಸಂಬಂಧವಾದ ಮೊಬಲಗು 20.00 ಕೋಟಿರೂಗಳನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಭರ್ತಿ ಮಾಡಿಕೊಡಲು ಮಂಜೂರಾತಿ ನೀಡಲಾಗಿದೆ. ಈ ಸೌಲಭ್ಯವು ದಿನಾಂಕ 31.03.2004ರೊಳಗೆ ಮೇಲಿನಂತೆ ಮರುಪಾವತಿ ಮಾಡುವ ಎಲ್ಲಾ ರೈತರಿಗೂ ಅನ್ವಯವಾಗುತ್ತದೆ.

ರೈತರು ಈಗಾಗಲೇ ಚಾಲ್ತಿ ಸಾಲಿನ ಬಡ್ಡಿಯನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಪಾವತಿಸಿದ್ದಲ್ಲಿ ಅದನ್ನು ಅವರಿಂದ ಬರಬೇಕಾದ ಮುಂದಿನ ಬಾಕಿಗಳಿಗೆ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

ಕಸ್ಕಾರ್ಡ್ ಬ್ಯಾಂಕು ವಸೂಲಾದ ಅಸಲು ಮತ್ತು ಬಡ್ಡಿ ಮನ್ನಾಗೆ ಸಂಬಂಧಪಟ್ಟಂತೆ ಮಾಸಿಕ ಪ್ರಗತಿ ವರದಿಗಳನ್ನು ಸಹಕಾರ ಇಲಾಖೆ ಮತ್ತು ಆರ್ಥಿಕ ಇಲಾಖೆಗಳಿಗೆ ಸಲ್ಲಿಸತಕ್ಕದ್ದು. ರೈತರಿಂದ ಚಾಲ್ತಿ ಸಾಲಿನ ಅಸಲು ವಸೂಲಿಯಾದ ನಂತರ, ಬಡ್ಡಿ ರಿಯಾಯಿತಿ ಕ್ಲೇಮು ಬಿಲ್ಲನ್ನು ಕಸ್ಕಾರ್ಡ್ ಬ್ಯಾಂಕು ಸಹಕಾರಿ ಲೆಕ್ಕಪರಿಶೋಧನಾ ಇಲಾಖೆಯಿಂದ ದೃಢೀಕರಿಸಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ಸದರಿ ಬಿಲ್ಲನ್ನು ಪರಿಶೀಲಿಸಿದ ನಂತರ ಹಣ ಬಿಡುಗಡೆ ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/1208/ವೆಚ್ಚ-2/03 ದಿನಾಂಕ:15-9-2003 ರಂತೆ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1218

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** "ವಿಫಲಬಾವಿ ಪರಿಹಾರ ಧನ" ಯೋಜನೆಯಲ್ಲಿ ಬಾಕಿ ಉಳಿದ ಸಾಲಗಳು ಮತ್ತು ಬಡ್ಡಿ ಹಣವನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ: ಸಿ-276, ದಿನಾಂಕ:28.8.2003.

**ಪ್ರಸ್ತಾವನೆ:**

ಹಾಲಿ ಜಾರಿಯಲ್ಲಿರುವ ವಿಫಲಬಾವಿ ಪರಿಹಾರ ಧನ ಯೋಜನೆಯಡಿಯಲ್ಲಿ ಸರ್ಕಾರವು ಅಸಲನ್ನು ಭರಿಸುತ್ತಿದ್ದು ಬಡ್ಡಿ ಹಣವನ್ನು ನಬಾರ್ಡ್ ಮತ್ತು ಕಸ್ಕಾರ್ಡ್ ಬ್ಯಾಂಕುಗಳು ಕ್ರಮವಾಗಿ ಶೇಕಡಾ 50.50 ಪ್ರಮಾಣದಲ್ಲಿ ಭರಿಸುತ್ತಲಿತ್ತು. ಆದರೆ, ಇತ್ತೀಚಿನ ವರ್ಷಗಳಲ್ಲಿ ನಬಾರ್ಡ್ ಸಂಸ್ಥೆಯು ತನ್ನ ಭಾಗದ ಬಡ್ಡಿ ಹಣವನ್ನು ಭರಿಸಲು ನಿರಾಕರಿಸಿದ್ದು ಇದನ್ನು ವಿಷಯ ಸಮಿತಿಯು 2002-03 ಮತ್ತು 2003-04ನೇ ಸಾಲಿನಲ್ಲಿ ಪರಿಶೀಲಿಸಿ ಈ ಬಡ್ಡಿ ಹಣವನ್ನು ಸಹ ಸರ್ಕಾರವೇ ಭರಿಸಬೇಕೆಂದು ಶಿಫಾರಸ್ಸು ಮಾಡಿದೆ. ನಬಾರ್ಡ್ ಸಂಸ್ಥೆ ನೀಡಬೇಕಾಗಿದ್ದ ಈ ಬಡ್ಡಿ ಹಣ ರೂ. 5.52 ಕೋಟಿಗಳನ್ನು ಸರ್ಕಾರವೇ ಭರಿಸಲು 2003-04ರ ವಿಷಯ ಸಮಿತಿಯು ಶಿಫಾರಸ್ಸು ಮಾಡಿದೆ. 2003-04ರ ವಿಷಯ ಸಮಿತಿಯ ವರದಿಯ ಪ್ರಕಾರ ದಿನಾಂಕ: 31.3.2003ಕ್ಕೆ ಬಾಕಿ ಇರುವ ಪ್ರಕರಣಗಳು 14002 ಇದ್ದು ಇವುಗಳ ಪರಿಹಾರಧನದ ಮೊತ್ತವು ರೂ.22.43 ಕೋಟಿಗಳಾಗಿರುತ್ತದೆ. ಈಗ ಸರ್ಕಾರವು ರೂ.22.00 ಕೋಟಿಗಳನ್ನು (ರೂ.ಇಪ್ಪತ್ತೆರಡು ಕೋಟಿಗಳು ಮಾತ್ರ) ವಿಫಲಬಾವಿ ಪರಿಹಾರಧನವನ್ನಾಗಿ (ಅಸಲು ಮತ್ತು ಬಡ್ಡಿ ಸಹಿತ) ಮಂಜೂರು ಮಾಡಲು ತೀರ್ಮಾನಿಸಿದೆ ಅಂತೆಯೇ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 99 ಸಿಎಲ್ಎಸ್ 2002, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ವಿಫಲಬಾವಿ ಪರಿಹಾರ ಧನ ಯೋಜನೆಯಡಿಯಲ್ಲಿ ರೂ. 22.00 ಕೋಟಿ (ರೂ. ಇಪ್ಪತ್ತೆರಡು ಕೋಟಿಗಳು ಮಾತ್ರ)ಗಳನ್ನು ಬಾಕಿ ಉಳಿದ ಸಾಲ ಮತ್ತು ಬಡ್ಡಿ ಹಣವನ್ನು ಮನ್ನಾ ಮಾಡಲು ಮಂಜೂರು ನೀಡಿದೆ ಈ ಪೈಕಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿರುವ ರೂ.1.00 ಕೋಟಿಯನ್ನು (ರೂ.ಒಂದು ಕೋಟಿ ಮಾತ್ರ) ಮೊದಲ ಕಂತಾಗಿ ಬಿಡುಗಡೆ ಮಾಡಲಾಗಿದೆ.

ಈ ಉದ್ದೇಶಕ್ಕೆ ತಗಲುವ ವೆಚ್ಚವನ್ನು 2003-2004ನೇ ಸಾಲಿನಲ್ಲಿ 2425-ಸಹಕಾರ-107-ಸಾಲನೀಡಿಕೆ ಸಹಕಾರಿ ಸಂಸ್ಥೆಗಳಿಗೆ ಸಹಾಯ-03-ಸಣ್ಣ ನೀರಾವರಿ-01- ವಿಫಲಬಾವಿಗಳಿಗೆ ಪರಿಹಾರ ನಿಧಿ- 101 - ಸಹಾಯಾನುದಾನ - (2425-00-107-3-01) - ಯೋಜನೇತರ ಎಂಬ ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ನಿಬಂಧಕರು ಹಣ ಸ್ವೀಕೃತಿ ರಸೀತಿಯ ಮೇಲೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಇವರ ಮೇಲು ರುಜು ಪಡೆದು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ:1214:ವೆಚ್ಚ-2:03 ದಿನಾಂಕ:11-9-2003 ರಂತೆ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1219

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸುವರ್ಣ ಕರ್ನಾಟಕ ಏಕೀಕರಣದ ಸ್ವರ್ಣ ಜಯಂತಿ ಆಚರಣೆ ಸಲುವಾಗಿ, ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಒಂದು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ಸೃಜಿಸುವ ಬಗೆಗೆ- ಆದೇಶ.

**ಓದಲಾಗಿದೆ:** 1. ಕಡತ ಸಂಖ್ಯೆ: ಸಂಕಇ 675 ಕಸದ 2003.

**ಪ್ರಸ್ತಾವನೆ:**

ಕರ್ನಾಟಕವು ಏಕೀಕರಣಗೊಂಡು ನವೆಂಬರ್ 2006ಕ್ಕೆ 50 ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ, ಕರ್ನಾಟಕ ಏಕೀಕರಣದ ಸ್ವರ್ಣ ಜಯಂತಿಯನ್ನು ಆಚರಿಸಲು ತೀರ್ಮಾನಿಸಲಾಗಿದ್ದು, ಈ ಸಲುವಾಗಿ ರೂಪಿಸಿದ ಎಲ್ಲಾ ಕಾರ್ಯ ಯೋಜನೆಗಳ ಅನುಷ್ಠಾನದ ಕುರಿತು ಮೇಲುಸ್ತುವಾರಿಗಾಗಿ ಕರ್ನಾಟಕ ಸರ್ಕಾರದ ಸಚಿವಾಲಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಒಂದು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ಸೃಜಿಸುವಂತೆ, ಮೇಲೆ ಓದಲಾದ ಕಡತದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕೋರಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2002, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2003**

ಕರ್ನಾಟಕವು ಏಕೀಕರಣಗೊಂಡು, ನವೆಂಬರ್ 2006ಕ್ಕೆ 50 ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ, ಕರ್ನಾಟಕ ಏಕೀಕರಣ ಸ್ವರ್ಣ ಜಯಂತಿಯನ್ನು ಆಚರಿಸುವ ಸಲುವಾಗಿ, ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಒಂದು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 31ನೇ ಡಿಸೆಂಬರ್, 2006 ರವರೆಗೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1234 ವೆಚ್ಚ-5, 2003, ದಿನಾಂಕ: 29.7.2003 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1220

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69 ದಿನಾಂಕ:19-10-1972.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 667 ಭಾಮಇ 98 ದಿನಾಂಕ:15-04-2000.
3. ದಿನಾಂಕ:03-12-2002ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರ ಪತ್ರದ ಸಂಖ್ಯೆ:ಜೆಇಎ 6587/2002-03.

**ಪ್ರಸ್ತಾವನೆ:**

ಉಲ್ಲೇಖ(1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ರಾಜ್ಯ ಮಟ್ಟದ ಹಾಗೂ ಇಲಾಖಾ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸುವ ಬಗ್ಗೆ ಆದೇಶಿಸಲಾಗಿತ್ತು. ಅದರಂತೆ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸಿ ಕಾಲಕಾಲಕ್ಕೆ ಅದನ್ನು ಪುನರ್ ರಚಿಸಲಾಗುತ್ತಿದೆ.

ಉಲ್ಲೇಖ(2)ರಲ್ಲಿ ಓದಲಾಗಿರುವ ದಿನಾಂಕ:15-04-2000ದ ಸರ್ಕಾರದ ಆದೇಶದಲ್ಲಿ ರಚಿಸಲಾಗಿರುವ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯ ಎರಡು ವರ್ಷಗಳ ಅವಧಿಯು ದಿನಾಂಕ:14-04-2002ಕ್ಕೆ ಮುಕ್ತಾಯಗೊಂಡಿದೆ.

ಉಲ್ಲೇಖ(3)ರಲ್ಲಿ ಓದಲಾದ ದಿನಾಂಕ:03-12-2002ರ ತಮ್ಮ ಪತ್ರದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವಂತೆ ಸರ್ಕಾರವನ್ನು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 214 ಭಾಮಇ 2002, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಸರ್ಕಾರದ ವಿವಿಧ ಇಲಾಖೆಗಳ ಕಾರ್ಯದರ್ಶಿಗಳೊಂದಿಗೆ ನೌಕರರ ಸಂಘದ ಪ್ರತಿನಿಧಿಗಳನ್ನೊಳಗೊಂಡ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಸರ್ಕಾರವು ಪುನರ್ ರಚಿಸಿದೆ.

**ಸರ್ಕಾರದ ಪ್ರತಿನಿಧಿಗಳು**

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಡಳಿತ ಸುಧಾರಣೆ) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸದಸ್ಯರು |
| 6. | ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) | ಸದಸ್ಯರು |
| 7. | ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | ಸದಸ್ಯರು |

**ನೌಕರರ ಸಂಘದ ಪ್ರತಿನಿಧಿಗಳು**

| ಕ್ರ. ಸಂ. | ಹೆಸರು ಮತ್ತು ಕಛೇರಿ | ಇಲಾಖೆ | ಸಮಿತಿ ಪದನಾಮ |
|---|---|---|---|
| 1 | 2 | 3 | 4 |
| 1. | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ನ್ಯಾಯಾಂಗ ಇಲಾಖೆ | ಸದಸ್ಯರು |
| 2. | ಗೌರವಾಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಭೂಮಾಪನಾ, ಕಂದಾಯ ವ್ಯವಸ್ಥೆ ಹಾಗೂ ಭೂದಾಖಲೆಗಳ ಇಲಾಖೆ | ಸದಸ್ಯರು |
| 3. | ಪ್ರಧಾನ ಕಾರ್ಯದರ್ಶಿ<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಕರ್ನಾಟಕ ಸರ್ಕಾರದ ಸಚಿವಾಲಯ | ಸದಸ್ಯರು |
| 4. | ಖಜಾಂಚಿ<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 5. | ಪ್ರಧಾನ ಕಾರ್ಯದರ್ಶಿ<br>ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ,<br>ಗಾಂಧಿನಗರ ಬೆಂಗಳೂರು. | ಪ್ರಾಥಮಿಕ ಶಿಕ್ಷಣ | ಸದಸ್ಯರು |
| 6. | ಅಧ್ಯಕ್ಷರು<br>ಕರ್ನಾಟಕ ರಾಜ್ಯ "ಡಿ" ಗ್ರೂಪ್ ನೌಕರರ ಸಂಘ,<br>ಬಹುಮಹಡಿ ಕಟ್ಟಡ, ಬೆಂಗಳೂರು. | ಲೋಕೋಪಯೋಗಿ ಇಲಾಖೆ | ಸದಸ್ಯರು |
| 7. | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ವಾಹನ ಚಾಲಕರ ಕೇಂದ್ರ ಸಂಘ<br>ಕೆ.ಕೆ. ಗೆಸ್ಟ್‌ಹೌಸ್ ಆವರಣ ಹೈಗ್ರೌಂಡ್ಸ್, ಬೆಂಗಳೂರು. | ಆರೋಗ್ಯ ಇಲಾಖೆ | ಸದಸ್ಯರು |

| 1 | 2 | 3 | 4 |
|---|---|---|---|
| 8. | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ,<br>ಜಿಲ್ಲಾ ಶಾಖೆ, ಗುಲ್ಬರ್ಗಾ. | ಅಬಕಾರಿ ಇಲಾಖೆ | ಸದಸ್ಯರು |
| 9. | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ,<br>ಜಿಲ್ಲಾ ಶಾಖೆ, ಗದಗ. | ಖಜಾನೆ ಇಲಾಖೆ | ಸದಸ್ಯರು |
| 10. | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ,<br>ಜಿಲ್ಲಾ ಶಾಖೆ, ತುಮಕೂರು. | ಕಂದಾಯ ಇಲಾಖೆ | ಸದಸ್ಯರು |
| 11. | ಶ್ರೀ ರಂಗೇಗೌಡ, ಪ್ರ.ದ.ಸ.<br>ವೈದ್ಯಕೀಯ ಶಿಕ್ಷಣ ಇಲಾಖೆ ಲೆಕ್ಕಪತ್ರ ಶಾಖೆ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಬೆಂಗಳೂರು. | ಆರೋಗ್ಯ ಶಾಖೆ | ಸದಸ್ಯರು |
| 12. | ಉಪಾಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಕರ್ನಾಟಕ ಸರ್ಕಾರದ ಸಚಿವಾಲಯ | ಸದಸ್ಯರು |

2. ಜಂಟಿ ಸಮಾಲೋಚನಾ ಸಮಿತಿಯ ಅಧ್ಯಕ್ಷರು ಸಮಿತಿಯ ಮೊದಲನೆಯ ಸಭೆಯಲ್ಲಿ ಸದಸ್ಯರೊಡನೆ ಸಮಾಲೋಚಿಸಿ, ಸದಸ್ಯರಲೊಬ್ಬರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸುವರು.

3. ಈ ಪುನರ್ ರಚಿಸಲಾದ ಜಂಟಿ ಸಮಾಲೋಚನಾ ಸಮಿತಿಯು ದಿನಾಂಕ:19-10-1972ರಲ್ಲಿನ ಸರ್ಕಾರದ ಆದೇಶದ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69 ನಿಯಮ 7(ಬಿ)ರ ಪ್ರಕಾರ ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು(2) ವರ್ಷಗಳ ಅವಧಿಯವರೆಗೆ ಇರುತ್ತದೆ.

4. ಸಮಿತಿಯ ವ್ಯವಹಾರಗಳನ್ನು ದಿನಾಂಕ:19-10-1972ರ ಸರ್ಕಾರದ ಆದೇಶದ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69 ಮತ್ತು ತದನಂತರದ ತಿದ್ದುಪಡಿಗಳಿಗನುಗುಣವಾಗಿ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಕೃಷ್ಣಮೂರ್ತಿ**

ಪಿ.ಆರ್. 1221

ಸರ್ಕಾರದ ಉಪ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)

**ವಿಷಯ:** ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002 ದಿನಾಂಕ: 7.3.2003.
2. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 1 ಎಸ್‌ಎಎಸ್ 2003(15) ದಿನಾಂಕ: 19.5.2003.
3. ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಡಿಪಿಇಆರ್ 143 ಎಂಇಎ 2003, ದಿನಾಂಕ: 14.8.2003 ಮತ್ತು 28.8.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 7.3.2003 ರಲ್ಲಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಟ್ಟು 56 ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಿದ್ದು, ಇದರಲ್ಲಿ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯೂ ಸೇರಿರುತ್ತದೆ. ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 19.5.2003ರ ಅಧಿಸೂಚನೆಯಲ್ಲಿ ಶ್ರೀಮತಿ ಆರ್.ಎಸ್. ಸುಜಾತಾ, ಐ.ಎ.ಎಸ್. ಇವರನ್ನು ಸದರಿ ಇಲಾಖೆಯಲ್ಲಿ ಜಂಟಿ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಿ ನೇಮಿಸಲಾಗಿರುತ್ತದೆ. ಹಾಗೂ ಇವರು ದಿನಾಂಕ: 15.7.2003 ರಂದು ಈ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಆಡಳಿತಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ ಇವರು ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 28.8.2003ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀಮತಿ ಆರ್.ಎಸ್. ಸುಜಾತ ಇವರು ಹಿರಿಯ ಆಡಳಿತ ದರ್ಜೆಯ ಐ.ಎ.ಎಸ್. ಅಧಿಕಾರಿಯಾಗಿರುವುದರಿಂದ ಹಾಗೂ ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಯು ಉಪ ಕಾರ್ಯದರ್ಶಿಗಳಿಗೆ ಸಮಾನಾಂತರ ಹುದ್ದೆಯಾಗಿರುವುದರಿಂದ ಈ ಅಧಿಕಾರಿಗಳು ನೇಮಕಾತಿಯಾಗಿರುವ ಹುದ್ದೆಯನ್ನು ಅಪರ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಪದನಾಮೀಕರಿಸುವಂತೆ ಕೋರಿರುತ್ತಾರೆ.

ಈ ಕಾರಣದಿಂದಾಗಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಸೃಜಿಸಲಾಗಿರುವ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಅಪರ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2003**

ಶ್ರೀಮತಿ ಆರ್.ಎಸ್. ಸುಜಾತ, ಐ.ಎ.ಎಸ್. ಇವರನ್ನು ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಜಂಟಿ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗೆ ವರ್ಗಾಯಿಸಿ ನೇಮಿಸಿರುವ ಹಿನ್ನಲೆಯಲ್ಲಿ ಪ್ರಸ್ತುತ ಈ ಇಲಾಖೆಗೆ ಮಂಜೂರು ಮಾಡಲಾಗಿರುವ ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಕರ್ನಾಟಕ ಸರ್ಕಾರದ ಸಚಿವಾಲಯ (ನೇಮಕಾತಿ) ನಿಯಮಗಳು 1992ರ ಅನ್ವಯ ಸದರಿ ಅಧಿಕಾರಿಗಳು ಈ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ: 15.7.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ಅಪರ ನಿರ್ದೇಶಕರು (ಬಂಡವಾಳ ಹಿಂತೆಗೆಯುವಿಕೆ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1222

**ತಿದ್ದುಪಡಿ**

**ಸಂಖ್ಯೆ: ಸಿಆಸುಇ 73 ಸಸಿವಿ 2003, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2003**

ಇದೇ ಕ್ರಮ ಸಂಖ್ಯೆಯ ದಿನಾಂಕ: 18.08.2003ರ ಸರ್ಕಾರಿ ಆದೇಶದ ಈಗಿರುವ ಆದೇಶ ಭಾಗದ ಬದಲಿಗೆ ಈ ಕೆಳಗಿನಂತೆ ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಸರ್ಕಾರದ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ಹೆಚ್ಚುವರಿ ಹುದ್ದೆಗಳನ್ನು ಗುರುತಿಸುವ ಸಲುವಾಗಿ, ಸಚಿವಾಲಯದ ಮಟ್ಟದಲ್ಲಿ, ಸರ್ಕಾರದ ಅಪರ ಕಾರ್ಯದರ್ಶಿ (ಸೇವಾ ನಿಯಮಗಳು) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರ ನೇತೃತ್ವದಲ್ಲಿ ಒಂದು ರೀಡಿಪ್ಲಾಯ್‌ಮೆಂಟ್ ಸೆಲ್ ಅನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಸೆಲ್‌ನ ಕೆಲಸ ನಿರ್ವಹಿಸಲು ಈ ಕೆಳಕಂಡ ಹುದ್ದೆಗಳನ್ನು ಅವುಗಳಲ್ಲಿ ಈಗ ದಾರಣ ಮಾಡಿರುವ ಅಧಿಕಾರಿ : ನೌಕರರೊಂದಿಗೆ ಸದರಿ ಸೆಲ್‌ಗೆ ವರ್ಗಾಯಿಸಲಾಗಿದೆ.

1. ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಕಾರ್ಯಾಧ್ಯಯನ-2) ಹಾಗೂ ಅವರ ಶೀಘ್ರಲಿಪಿಗಾರರು.
2. ಶಾಖಾಧಿಕಾರಿ, ಸಿ.ಆ.ಸು.ಇಲಾಖೆ (ಕಾರ್ಯಾಧ್ಯಯನ-ಸಿ ಶಾಖೆ).
3. ಹಿರಿಯ ಸಹಾಯಕರು, ಸಿ.ಆ.ಸು.ಇಲಾಖೆ (ಕಾರ್ಯಾಧ್ಯಯನ-ಡಿ ಶಾಖೆ).

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 808 ಸೇ-3, ದಿನಾಂಕ: 20.6.2003 ಹಾಗೂ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ 15277 ದಿನಾಂಕ: 21.7.2003 ಗಳಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1223

**ಗ್ರಂಥಾಲಯ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಸಿಆಸುಇ 77 ಸಗ್ರಇ 2002, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2003**

**ಉಲ್ಲೇಖ:** ಸಾರ್ವಜನಿಕ ಪ್ರಕಟಣೆ ಸಂಖ್ಯೆ ಸಿಆಸುಇ 77 ಸಗ್ರಇ 2002 ದಿ: 16-6-03 (ಕರ್ನಾಟಕ ರಾಜ್ಯಪತ್ರ ಸಂಪುಟ 138 ಸಂಚಿಕೆ 28, ದಿ: 10 ಜುಲೈ 2003 ರ ಭಾಗದ 1 ಪುಟ ಸಂಖ್ಯೆ 891 ರಿಂದ 892 ರಲ್ಲಿ ಪ್ರಕಟಗೊಂಡಿರುತ್ತದೆ.)

ಉಲ್ಲೇಖಿತ ಸಾರ್ವಜನಿಕ ಪ್ರಕಟಣೆಯಲ್ಲಿ ಪ್ರಕಟಗೊಂಡ 4. **ಮಾಹಿತಿಗಳನ್ನು ಪಡೆಯಲು ನಾಗರಿಕರಿಗೆ ಲಭ್ಯವಿರುವ ಸೌಲಭ್ಯಗಳು ಹಾಗೂ ನಾಗರೀಕರಿಗೆ ನೀಡಬಹುದಾದ ಮಾಹಿತಿ** - ಶೀರ್ಷಿಕೆಯಡಿಯಲ್ಲಿನ ಕ್ರಮ ಸಂಖ್ಯೆ 7 "ಗ್ರಂಥಾಲಯದ ಗ್ರಂಥಗಳಲ್ಲಿ/ಫ್ಲಾಪಿಗಳಲ್ಲಿ/ಕಂಪ್ಯೂಟರಿನಲ್ಲಿ ಲಭ್ಯವಿರುವ ಮಾಹಿತಿಗಳ ಬಗ್ಗೆ" ಎಂಬ ವಾಕ್ಯವನ್ನು ಬಿಟ್ಟು ಓದಿಕೊಳ್ಳತಕ್ಕದ್ದು.
ಹಾಗೆಯೇ:-

ಮಾಹಿತಿಯನ್ನು ನೀಡಲು ಈ ಕೆಳಗೆ ಕಾಣಿಸಿದ ಅಂಶಗಳನ್ನು ಪರಿಗಣಿಸಲಾಗುವುದು - ಎಂಬ ಶೀರ್ಷಿಕೆಯನಲ್ಲಿನ -
ಕ್ರಮ ಸಂಖ್ಯೆ (2) ರಲ್ಲಿರುವ "ಸದಸ್ಯರು" ಎಂಬ ಪದವನ್ನು ಬಿಟ್ಟು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡೇನಿಯಲ್ ಬರೆಟ್ಟೊ**
ಮುಖ್ಯ ಗ್ರಂಥಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಸಚಿವಾಲಯ ಗ್ರಂಥಾಲಯ.

ಪಿ.ಆರ್. 1224

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಎ. ಡಂಬಳ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಇನ್ಸ್‌ಪೆಕ್ಟರ್, ಬೀಳಗಿ ಪೊಲೀಸು ಠಾಣೆ ಅವರ ಪತ್ರ ದಿನಾಂಕ: 2-5-2003.

**ಪ್ರಸ್ತಾವನೆ:**

ಪೊಲೀಸ್ ಇನ್ಸ್‌ಪೆಕ್ಟರ್ ಬೀಳಗಿ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಅವರು ಮೇಲೆ ಓದಲಾದ ದಿನಾಂಕ 2-5-2003ರ ತಮ್ಮ ಪತ್ರದಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಮುಳುಗಡೆಯಾದ ಬೀಳಗಿ ಕ್ರಾಸ್ ನಂಬರ್-2 ಪುನರ್‌ವಸತಿ ಕೇಂದ್ರದ ಟಕ್ಕಳಕಿ ಹಾಗೂ ಗೋವಿನದಿನ್ನಿ ಗ್ರಾಮಗಳ ಮುಳುಗಡೆ ಸಂತ್ರಸ್ಥರಿಗೆ ನಿವೇಶನಗಳ ಹಕ್ಕು ಪತ್ರಗಳನ್ನು ಹಂಚುವಲ್ಲಿ ಅವ್ಯವಹಾರ ನಡೆದಿದೆ ಎಂದು ಆರೋಪಿಸಿ ಯೋಜನೆಯ ಪುನರ್‌ವಸತಿ ಅಧಿಕಾರಿಗಳು ದಿನಾಂಕ 31-12-1995 ರಂದು ದೂರು ಸಲ್ಲಿಸಿದ ಮೇರೆಗೆ ಗುನ್ಹೆ ಸಂಖ್ಯೆ 152:95ನ್ನು ದಾಖಲಿಸಿಕೊಂಡು ತನಿಖೆ ನಡೆಸಲಾಗಿ ಈ ಹಕ್ಕು ಪತ್ರಗಳನ್ನು ಬೀಳಗಿ-2ರ ಪುನರ್‌ವಸತಿ ಕೇಂದ್ರದಲ್ಲಿ ಪಿ.ಎಚ್. ಪೂಜಾರ್, ವಕೀಲರು, ಇವರ ಗುಮಾಸ್ತರಾದ ಹಣಮಂತಗೌಡ ಪಾಟೀಲ್ ಎಂಬುವರು 25-12-1995 ರಂದು ನೀಡಿರುವುದಾಗಿ ಫಲಾನುಭವಿಗಳು ತಿಳಿಸಿದ್ದು ಸದರಿ ಹಣಮಂತಗೌಡ ಪಾಟೀಲ್ ಒಬ್ಬ ಖಾಸಗೀ ವ್ಯಕ್ತಿಯಾಗಿದ್ದು ಸರ್ಕಾರದ ವತಿಯಿಂದ ವಿತರಿಸಲ್ಪಡುವ ನಿವೇಶನ ಹಕ್ಕು ಪತ್ರಗಳು ಈತನ ಕೈ ತಲುಪಲು ಹೇಗೆ ಸಾಧ್ಯ ಎಂಬ ಬಗ್ಗೆ ತನಿಖೆ ನಡೆಸಲಾಗಿ ಸದರಿ ಹಕ್ಕು ಪತ್ರಗಳು ಹಿಂದಿನ ವಿಶೇಷ ಭೂಸ್ವಾಧೀನ ಅಧಿಕಾರಿ ಶ್ರೀ ಎಸ್.ಎ. ಡಂಬಳ ಅವರ ಸಹಿ ಹಾಗೂ ಮೊಹರನ್ನು ಹೊಂದಿದ್ದವು. ವಿಶೇಷ ಭೂಸ್ವಾಧೀನ ಅಧಿಕಾರಿಗಳ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಎಸ್.ಎ. ಸೋಮಶೇಖರ್ ಅವರು ಎಸ್.ಎ. ಡಂಬಳ, ಅವರಿಂದ ಸಹಿ ಮಾಡಲ್ಪಟ್ಟ ಖಾಲಿ ಹಕ್ಕು ಪತ್ರಗಳನ್ನು ಹಾಗೂ ಅವುಗಳನ್ನು ವಿತರಿಸುವ ರಿಜಿಸ್ಟರ್‌ನ್ನು ತಮ್ಮ ವಶದಲ್ಲಿಯೇ ಇಟ್ಟುಕೊಂಡು ಖಾಸಗಿಯವರಿಗೆ ಅನಧಿಕೃತವಾಗಿ ಹಂಚುತ್ತಿರುವುದು ಬೆಳಕಿಗೆ ಬಂದಿತು.

ಹಕ್ಕು ಪತ್ರಗಳನ್ನು ಕೇವಲ ಸಂತ್ರಸ್ಥರಿಗೆ ಮಾತ್ರ ಅದೂ ಕ್ರಮಬದ್ಧ ಪರಿಶೀಲನೆ ನಡೆದ ನಂತರ ಸಹಿ ಮಾಡಿ ಹಂಚಿಕೆ ಮಾಡಬೇಕಿದೆ. ಆದರೆ ಎಸ್.ಎ. ಡಂಬಳ, ಕೆ.ಎ.ಎಸ್. ಹಿಂದಿನ ವಿಶೇಷ ಭೂಸ್ವಾಧೀನ ಅಧಿಕಾರಿ ಅವರು ಖಾಲಿ ಹಕ್ಕು ಪತ್ರಗಳಿಗೆ ಸಹಿ ಹಾಕಿ ಬೇರೆಯವರಿಗೆ ಕೊಡುವ ಮೂಲಕ ಅವುಗಳು ಖಾಸಗಿಯವರ ಪಾಲಾಗಿ ಅನಧಿಕೃತ ಹಾಗೂ ಅನರ್ಹರಿಗೆ ನೀಡಲ್ಪಟ್ಟು ಇದರಿಂದಾಗಿ ಶ್ರೀ ಎಸ್.ಎ. ಡಂಬಳ, ಕೆ.ಎ.ಎಸ್. ಅವರು ಸರ್ಕಾರಕ್ಕೆ ವಂಚನೆ ಮಾಡಿ ಕ್ರಿಮಿನಲ್ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಅನುಮತಿ ನೀಡುವಂತೆ ಕೋರಿದ್ದಾರೆ.

ಬೀಳಗಿ ಪೊಲೀಸು ಠಾಣೆ ಇನ್ಸ್‌ಪೆಕ್ಟರ್ ಅವರು ವರದಿಯೊಡನೆ ಸಲ್ಲಿಸಿರುವ ದಾಖಲೆ, ಕಾಗದ ಪತ್ರಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಎಸ್.ಎ. ಡಂಬಳ, ಕೆಎಎಸ್ ಅಧಿಕಾರಿ ಅವರೂ ಈ ಕ್ರಿಮಿನಲ್ ದುರ್ನಡತೆಯಲ್ಲಿ ಭಾಗಿಯಾಗಿರುವುದು ಕಂಡು ಬರುತ್ತದೆ. ಮೇಲಾಗಿ ಎಸ್.ಎ. ಸೋಮಶೇಖರ್, ಪ್ರಥಮ ದರ್ಜೆ ಸಹಾಯಕರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಸಕ್ಷಮ ಪ್ರಾಧಿಕಾರಿಯಾದ ಬಾಗಲಕೋಟೆ ಜಿಲ್ಲಾಧಿಕಾರಿಗಳು ಅನುಮತಿ ನೀಡಿದ್ದಾರೆ. ಉಳಿದವರ ಮೇಲೆ ಈಗಾಗಲೇ ಮೊಕದ್ದಮೆ ದಾಖಲು ಮಾಡಿಕೊಳ್ಳಲಾಗಿದೆ. ಖಾಲಿ ನಿವೇಶನ ಹಕ್ಕು ಪತ್ರಗಳಿಗೆ ಸಹಿ ಮಾಡಿ ಇನ್ನೊಬ್ಬರ ವಶಕ್ಕೆ ಕೊಡುವುದು, ಅದು ಅನಂತರ ತುಂಬಲ್ಪಟ್ಟು ಅನರ್ಹ ಹಾಗೂ ಖಾಸಗಿ ವ್ಯಕ್ತಿಗಳ ಪಾಲಾಗುವುದು ಇವೆಲ್ಲ ಕ್ರಿಮಿನಲ್ ದುರ್ನಡತೆಗಳು. ವಿಧಿ ವಿಜ್ಞಾನ ಪ್ರಯೋಗಾಲಯವೂ ಸಹ ತನ್ನ ದಿನಾಂಕ: 9-4-1996ರ ವರದಿಯಲ್ಲಿ ಹಕ್ಕುಪತ್ರಗಳಲ್ಲಿನ ಸಹಿಯು ಎಸ್.ಎ. ಡಂಬಳ ಅವರದ್ದೇ ಎಂದು ದೃಢಪಡಿಸಿರುವುದನ್ನು ಸರ್ಕಾರವು ಗಮನಿಸಿದೆ ಹಾಗೂ ಇದರಿಂದಾಗಿ ಕ್ರಿಮಿನಲ್ ಮೊಕದ್ದಮೆ ಹೂಡಲು ಇದೊಂದು ಅರ್ಹ ಪ್ರಕರಣವೆಂದು ಭಾವಿಸಿದ ಸರ್ಕಾರವು ಎಸ್.ಎ. ಡಂಬಳ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಅನುಮತಿ ನೀಡುವುದು ಉಚಿತವೆಂದು ಭಾವಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 45 ಎಸ್‌ಇಎನ್ 95, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2003**

ಭಾರತೀಯ ದಂಡ ಸಂಹಿತೆಯ ಕಲಂ 418 ರೊಡನೆ ಓದಿಕೊಂಡಂತೆ ಕ್ರಿಮಿನಲ್ ಪ್ರೊಸೀಜರ್ ಕೋಡ್ 1973ರ ಸೆಕ್ಷನ್ 197ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಎಸ್.ಎ. ಡಂಬಳ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಬೀಳಗಿ ಠಾಣೆ ಪೊಲೀಸರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1225

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ಫಿಜಿಯಾಲಜಿ ಉಪನ್ಯಾಸಕ ಡಾ:ಕೆ.ಪಿ.ಚಿಕ್ಕೇಶ್ವರಸ್ವಾಮಿ ರವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ:**

1. ತಾ: 20.12.1995 ಸಂಖ್ಯೆ ಆಕುಕ 72 ವೈಆಸೇ 95ರ ನೋಟೀಸ್
2. ತಾ: 09.12.1999 ಸಂಖ್ಯೆ ಆಕುಕ 72 ಎಂಸಿಎಲ್ 95ರ ಸರ್ಕಾರಿ ಆದೇಶ
3. ತಾ: 20.09.2000 ಸಂಖ್ಯೆ ಆಕುಕ 72 ಎಂಸಿಎಲ್ 95ರ 2ನೇ ಕಾರಣ ಕೇಳುವ ನೋಟೀಸ್

